# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 622
ಸದಸ್ಯರ ಹೆಸರು : ಶ್ರೀ ಎಂ.ಎ ಗೋಪಾಲಸ್ವಾಮಿ
ಉತ್ತರಿಸುವ ದಿನಾಂಕ : 17-12-2021
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸರ್ಕಾರದ ಆದೇಶ ಸಂ: ಸಕಇ 29 ಎಸ್‌ಎಲ್‌ಪಿ 2019, ದಿನಾಂಕ: 20.07.2019 ರಲ್ಲಿ ಡಾ:ಬಿ.ಆರ್ ಅಂಬೇಡ್ಕರ್ ಅಭಿವೃದ್ಧಿ ನಿಗಮದಲ್ಲಿ ಬಳಕೆಯಾಗದಿರುವ ಉಳಿಕೆ ಅನುದಾನ ಒಟ್ಟು ರೂ.42101.00 ಲಕ್ಷಗಳನ್ನು ಸಮಾಜ ಕಲ್ಯಾಣ ಇಲಾಖೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆಯ ವಿವಿಧ ಕಾರ್ಯಕ್ರಮಗಳಿಗೆ ಉಪಯೋಗಿಸಲು ಹಂಚಿಕೆ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು,<br><br>ಸರ್ಕಾರದ ಆದೇಶ ಸಂಖ್ಯೆ: ಸಕಇ 29 ಎಸ್‌ಎಲ್‌ಪಿ 2019, ದಿನಾಂಕ: 20-07-2019 ರ ಅನುಬಂಧ-3 ರಲ್ಲಿ ಡಾ|| ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತದಲ್ಲಿ ಹಿಂದಿನ ಸಾಲುಗಳಲ್ಲಿ ಬಳಕೆಯಾಗದೇ ಉಳಿಕೆಯಾಗಿರುವ ರೂ.42101.00 ಲಕ್ಷಗಳನ್ನು ಸಮಾಜ ಕಲ್ಯಾಣ ಇಲಾಖೆಯ ವಿವಿಧ ಕಾರ್ಯಕ್ರಮಗಳಿಗೆ ಮರು ಹಂಚಿಕೆ ಮಾಡಿ ಬಿಡುಗಡೆ ಮಾಡಲಾಗಿರುತ್ತದೆ. |
| ಆ) | ಹಾಗಿದ್ದಲ್ಲಿ, ಸದರಿ ಆದೇಶದಲ್ಲಿ ಪ್ರಗತಿ ಕಾಲೋನಿ ಯೋಜನೆ-ಪರಿಶಿಷ್ಟ ಜಾತಿಗಳ ಕಾಲೋನಿಗಳನ್ನು ಅಭಿವೃದ್ಧಿ ಪಡಿಸಲು ರೂ.15601.00 ಲಕ್ಷ ಅನುದಾನವನ್ನು ಆಯುಕ್ತರು, ಸಮಾಜ ಕಲ್ಯಾಣ ಇಲಾಖೆಗೆ ಹಂಚಿಕೆ ಮಾಡಿದ್ದು, ಈ ಅನುದಾನವನ್ನು ಡಾ:ಬಿ.ಆರ್ ಅಂಬೇಡ್ಕರ್ ಅಭಿವೃದ್ಧಿ ನಿಗಮವು ಬಿಡುಗಡೆ ಮಾಡಿದೆಯೇ; ಮಾಡಿದ್ದಲ್ಲಿ, ಎಷ್ಟು ಅನುದಾನ ಬಿಡುಗಡೆ ಮಾಡಿದೆ ಹಾಗೂ ಬಿಡುಗಡೆಯಾಗದೆ ಬಾಕಿ ಉಳಿದಿರುವ ಅನುದಾನ ಎಷ್ಟು; (ದಾಖಲೆ ಸಹಿತ ವಿವರ ನೀಡುವುದು) | ಮೇಲ್ಕಂಡಂತೆ ಮರು ಹಂಚಿಕೆ ಮಾಡಿ ಬಿಡುಗಡೆ ಮಾಡಲಾದ ರೂ.42101.00 ಲಕ್ಷಗಳ ಪೈಕಿ ರೂ.15601.00 ಲಕ್ಷಗಳ ಅನುದಾನವು ಪ್ರಗತಿ ಕಾಲೋನಿ ಯೋಜನೆಗೆ ಸಂಬಂಧಪಟ್ಟಿರುತ್ತದೆ. ಅದರನ್ವಯ ರೂ.15601.00 ಲಕ್ಷಗಳನ್ನು ದಿನಾಂಕ: 01-08-2019 ರಲ್ಲಿ ಸಂಬಂಧಪಟ್ಟ ಜಿಲ್ಲೆಗಳಿಗೆ ಮರು ಬಿಡುಗಡೆ ಮಾಡಲಾಗಿರುತ್ತದೆ.<br><br>ಸದರಿ ಮರು ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಆರ್.ಟಿ.ಜಿ.ಎಸ್ ಮುಖಾಂತರ ವರ್ಗಾಯಿಸುವಂತೆ ವ್ಯವಸ್ಥಾಪಕ ನಿರ್ದೇಶಕರು, ಡಾ|| ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ ಇವರಿಗೆ ಆದೇಶಿಸಲಾಗಿರುತ್ತದೆ.<br><br>ಈ ಸಂಬಂಧವಾಗಿ ಡಾ|| ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ ವತಿಯಿಂದ ರೂ.8673.77 ಲಕ್ಷಗಳನ್ನು ಆರ್.ಟಿ.ಜಿ.ಎಸ್ ಮುಖಾಂತರ ವರ್ಗಾಯಿಸಲಾಗಿರುತ್ತದೆ. |

| | | |
|---|---|---|
| ಇ) | ಬಿಡುಗಡೆಯಾಗದೇ ಬಾಕಿ ಉಳಿದಿದ್ದಲ್ಲಿ, ಇಲ್ಲಿಯವರೆಗೆ ಬಿಡುಗಡೆ ಮಾಡದಿರಲು ಕಾರಣಗಳೇನು; ಸದರಿ ಅನುದಾನದಲ್ಲಿ ಕೈಗೊಂಡಿರುವ ಕಾಮಗಾರಿಗಳಿಗೆ ಯಾವ ಕಾಲಮಿತಿಯೊಳಗೆ ಅನುದಾನ ಬಿಡುಗಡೆ ಮಾಡಲಾಗುವುದು? (ಸಂಪೂರ್ಣ ವಿವರ ನೀಡುವುದು) | ಡಾ॥ ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮದಲ್ಲಿ ಲಭ್ಯವಿರುವ ಮೊತ್ತವನ್ನು ಸರ್ಕಾರದ ಯೋಜನೆಗಳಾದ ಗಂಗಾ ಕಲ್ಯಾಣ ಯೋಜನೆ, ಸ್ವಯಂ ಉದ್ಯೋಗ ಯೋಜನೆ, ಭೂ ಒಡೆತನ ಯೋಜನೆ, ಮೈಕ್ರೋ ಕ್ರೆಡಿಟ್ ಯೋಜನೆ, ಸಮೃದ್ಧಿ ಯೋಜನೆ, ಐರಾವತ ಯೋಜನೆ ಇನ್ನು ಮುಂತಾದ ಯೋಜನೆಗಳಿಗೆ ಕ್ರಿಯಾ ಯೋಜನೆ ರೂಪಿಸಿ ಅನುಷ್ಠಾನಗೊಳಸಲು ಕ್ರಮವಹಿಸಲಾಗಿರುತ್ತದೆ ಹಾಗೂ 2019-20ನೇ ಸಾಲಿನಲ್ಲಿ ಸರ್ಕಾರದ ಆಯವ್ಯಯದಲ್ಲಿ ನಿಗಮಕ್ಕೆ ಅನುದಾನ ಬಿಡುಗಡೆಯಾಗಿರುವುದಿಲ್ಲ.<br>2020-21ನೇ ಸಾಲಿನಲ್ಲಿ ರೂ.140.00 ಕೋಟಿಗೆ ಬದಲಾಗಿ ಕೇವಲ ರೂ.58.00 ಕೋಟಿ ಮಾತ್ರ ಬಿಡುಗಡೆಯಾಗಿರುತ್ತದೆ. ನಿಗಮದ ಯೋಜನೆಗಳನ್ನು ರೂಪಿಸುವಲ್ಲಿ ಆರ್ಥಿಕ ಕೊರತೆ ಯಾಗಿರುವುದರಿಂದ ನಿಗಮದಿಂದ ಸಮಾಜ ಕಲ್ಯಾಣ ಇಲಾಖೆಗೆ ಹಣ ಬಿಡುಗಡೆ ಮಾಡಿರುವುದಿಲ್ಲ. |

**ಸಕಇ 577 ಎಸ್‌ಎಲ್‌ಪಿ 2021**

**(ಕೋಟ ಶ್ರೀನಿವಾಸ ಪೂಜಾರಿ)**
**ಸಮಾಜ ಕಲ್ಯಾಣ ಹಾಗೂ**
**ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು**